

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1962 |
| ಸದಸ್ಯರ ಹೆಸರು | : | ಶ್ರೀ ಕಾಂತ್ ರಾಜ್ (ಬಿಎಂಎಲ್)<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವ ಸಚಿವರು | : | ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಭದ್ರಾವತಿಯಲ್ಲಿರುವ ಮೈಸೂರು ಕಾಗದ ಕಾರ್ಖಾನೆ (MPM) ಯನ್ನು ಖಾಸಗಿಯವರಿಗೆ ವಹಿಸಲು ಟೆಂಡರ್ ಕರೆಯಲಾಗಿದೆಯೇ; (ಮಾಹಿತಿ ನೀಡುವುದು) | ಭದ್ರಾವತಿಯಲ್ಲಿರುವ ಮೈಸೂರು ಕಾಗದ ಕಾರ್ಖಾನೆ (ಎಂಪಿಎಂ) ಕಾರ್ಯಚರಣೆಯನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಕರ್ನಾಟಕ ಸರ್ಕಾರದ ಇ-ಪೋರ್ಟ್ ಲ್ ನಲ್ಲಿ ಟೆಂಡರ್ ಕರೆಯಲಾಗಿದೆ. ಟೆಂಡರ್ ಪ್ರಕ್ರಿಯೆಯ ವೇಳಾ ಪಟ್ಟಿ ಈ ಕೆಳಕಂಡಂತೆ ಇರುತ್ತದೆ.<br>ಟೆಂಡರ್ ಪ್ರಕಟಣಾ ದಿನಾಂಕ: 25.11.2020<br>ಟೆಂಡರ್ ಬಿಡ್ ಸಲ್ಲಿಸುವ ಅಂತಿಮ ದಿನಾಂಕ: 10.01.2021<br>ಟೆಕ್ನಿಕಲ್ ಬಿಡ್ ತೆರೆಯುವ ದಿನಾಂಕ: 13.01.2021<br>ಫೈನಾನ್ಸಿಯಲ್ ಬಿಡ್ ತೆರೆಯುವ ದಿನಾಂಕ: 15.02.2021<br>ಈ ಟೆಂಡರ್‌ಗೆ Corrigendum ಪ್ರಕಟಿಸಿ 15 ದಿನಗಳ ಕಾಲಾವಕಾಶವನ್ನು ಹೆಚ್ಚಿಸಲಾಯಿತು. ಆದರಂತೆಯೇ<br>ಟೆಂಡರ್ ಬಿಡ್ ಸಲ್ಲಿಸುವ ಅಂತಿಮ ದಿನಾಂಕ : 28.01.2021<br>ಟೆಕ್ನಿಕಲ್ ಬಿಡ್ ತೆರೆಯುವ ದಿನಾಂಕ : 30.01.2021<br>ಫೈನಾನ್ಸಿಯಲ್ ಬಿಡ್ ತೆರೆಯುವ ದಿನಾಂಕ : 04.03.2021 |

| | | |
|---|---|---|
| | | ಈ ವೇಳಾ ಪಟ್ಟಿಯಂತೆ Request For Proposal (REP) ಯನ್ನು ತೆರೆಯಲಾಗಿ ಯಾವುದೇ ಬಿಡ್ ದಾರರು ಬಿಡ್ ಸಲ್ಲಿಸಿರುವುದಿಲ್ಲ. |
| ಆ) | ಪ್ರತಿಷ್ಠಿತ ಮೈಸೂರು ಮಹಾರಾಜರಿಂದ ಸ್ಥಾಪಿಸಲ್ಪಟ್ಟ ಈ ಕಾರ್ಖಾನೆಯನ್ನು ಖಾಸಗಿಯವರಿಗೆ ವಹಿಸಲು ಕಾರಣಗಳೇನು; | ಮೈಸೂರು ಕಾಗದ ಕಾರ್ಖಾನೆಯು 2008-2009 ರಿಂದ ಸತತವಾಗಿ ನಷ್ಟ ಅನುಭವಿಸಿರುತ್ತದೆ. ಈ ಕಾರಣದಿಂದ ಕಂಪನಿಯ ಕಾರ್ಯಾಚರಣೆಯನ್ನು ಮುಂದುವರೆಸಲು ಕಷ್ಟಸಾಧ್ಯ ವಾಗಿರುತ್ತದೆ ಮತ್ತು ನಷ್ಟ ಅನುಭವಿಸಲು ಪ್ರಮುಖ ಕಾರಣಗಳು :<br>1. ಹಳೆಯದಾದ ಯಂತ್ರೋಪಕರಣಗಳು<br>2. ಆಧುನಿಕ ತಂತ್ರಜ್ಞಾನವನ್ನು ಅಳವಡಿಸದೇ ಇರುವುದು<br>3. ಅತಿಯಾದ ಸಿಬ್ಬಂದಿ ವೆಚ್ಚ.<br>4. ಮಾರುಕಟ್ಟೆಯಲ್ಲಿ ಕಾಗದದ ಬೇಡಿಕೆ, ಬೆಲೆಗಳಲ್ಲಿ ಏರಿಳಿತ ಹಾಗೂ ವಿದೇಶಿ ಕಾಗದದ ಆಮದು ಬೆಲೆಯು ದೇಶೀಯ ಬೆಲೆಗಿಂತ ಬಹಳಷ್ಟು ಕಡಿಮೆ ಇರುತ್ತದೆ.<br>ಈ ಮೇಲ್ಕಾಣಿಸಿದ ಕಾರಣಗಳಿಂದ ಕಂಪನಿಯ ಕಾರ್ಯಚರಣೆಯನ್ನು ಸ್ಥಗಿತಗೊಳಿಸಿ ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ತೀರ್ಮಾನಿಸಿದೆ. |
| ಇ) | ಈ ಕಾರ್ಖಾನೆಗೆ ಕಚ್ಚಾವಸ್ತು ಬೆಳೆಯಲು ನೀಡಿರುವ ಭೂಮಿಯಲ್ಲಿ ಬೆಳೆದಿರುವ ಮರಗಳ ಇಂದಿನ ಮೌಲ್ಯವೇನು; ( ವಿವರವಾದ ಮಾಹಿತಿ ನೀಡುವುದು) | ಹಾಲಿ ಎಂಪಿಎಂ ಅರಣ್ಯ ವಿಭಾಗವು ಬೆಳೆಸಿರುವ ಆಕೇಶಿಯಾ ಮರಗಳಿಂದ ಸುಮಾರು 8.5ಲಕ್ಷ ಮೆ.ಟನ್ ಮತ್ತು ನೀಲಗಿರಿ ಜಾತಿಯ ಮರಗಳಿಂದ ಪಲ್ಪವುಡ್ ಮತ್ತು ಪೈನ್ ಜಾತಿಯ ಮರಗಳಿಂದ 8 ಸಾವಿರ ಮೆ.ಟನ್ ಪ್ರಮಾಣ ದೊರೆಯಬಹುದೆಂದು ಅಂದಾಜಿಸಿದ್ದು, ಇವುಗಳ ಒಟ್ಟು ಮಾರುಕಟ್ಟೆ ಮೌಲ್ಯ ಅಂದಾಜು ರೂ.300 ಕೋಟಿ ಇರುತ್ತದೆ. |

| | | |
|---|---|---|
| ಈ) | ಈ ಕಾರ್ಖಾನೆಯನ್ನು ಖಾಸಗಿಯವರಿಗೆ ವಹಿಸದೆ ಸರ್ಕಾರವೇ ನಡೆಸಲು ಇರುವ ತೊಂದರೆಗಳೇನು; (ವಿವರ ನೀಡುವುದು) | ಮೈಸೂರು ಕಾಗದ ಕಾರ್ಖಾನೆಯ ಕಾರ್ಯಾಚರಣೆಗೆ ಹೆಚ್ಚಿನ ಹಣದ ಅಗತ್ಯವಿರುತ್ತದೆ ಮತ್ತು ಹಳೆಯದಾದ ಯಂತ್ರೋಪಕರಣ ಹಾಗೂ ತಂತ್ರಜ್ಞಾನವನ್ನು ನವೀಕರಿಸಲು ಸುಮಾರು ರೂ.1500 ಕೋಟಿಗಳಷ್ಟು ಹೂಡಿಕೆಯ ಅಗತ್ಯವಿರುತ್ತದೆ ಮತ್ತು ಹೂಡಿಕೆ ಮಾಡುವುದಾದರೆ 2 ರಿಂದ 3 ವರ್ಷಗಳ ಕಾಲಾವಕಾಶ ಬೇಕಾಗಿರುತ್ತದೆ. ಈ ಕಾರಣಗಳಿಂದಾಗಿ ಕಂಪನಿಯ ಕಾರ್ಯಚರಣೆಯನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರದ ಮೇಲೆ ವಹಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |
| ಉ) | ಈ ಟೆಂಡರ್‌ನ್ನು ಯಾವಾಗ ರದ್ದುಗೊಳಿಸಲಾಗುವುದು? | Request For Proposal (REP) ಯನ್ನು ಮರು ನಿಗದಿತ ದಿನಾಂಕವಾದ 30.01.2021 ರಂದು ತೆರೆಯಲಾಯಿತು ಮತ್ತು ಯಾವುದೇ ಬಿಡ್ ದಾರರು ಬಿಡ್ ಮಾಡದೇ ಇರುವುದರಿಂದ ಈ ಟೆಂಡರ್ ಸದ್ಯ ಅನುಚಿತವಾಗಿರುತ್ತದೆ. |

ಸಿಐ 16 ಸಿಎಂಐ 2021 (ಇ)

(ಜಗದೀಶ ಶೆಟ್ಟರ),
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು